ಒಂದಾಣೆ ಮಾಲೆ **225**

# ಕೇನೋಪನಿಷತ್

## (ಕನ್ನಡ ತಾತ್ಪರ್ಯ ಸಹಿತ)




ಕನ್ನಡ ಅನುವಾದಕ:

ಶ್ರೀ ಕೋ. ಶ. ಕಾರಂತ, ಬಿ.ಎ., ಬಿ.ಎಲ್.,

ಎಡ್ವಕೇಟ್, ಮಂಗಳೂರು-3.





1959

ಬೆಲೆ: ೧ ಆಣೆ.

ಒಂದಾಣೆ ಮಾಲೆ, ಮಂಗಳೂರು.

[13ನೇ ಕವರ್‌ಪುಟದಿಂದ ಮುಂದುವರಿದುದು.]

ತಪಸ್ಸು, ದಮನ (ಶಾಂತತೆ) (ಅಗ್ನಿಹೋತ್ರಾದಿ) ಕರ್ಮಗಳು, ವೇದಗಳು ಮತ್ತು ವೇದಾಂಗಗಳು ಈ ರಹಸ್ಯಬೋಧೆಯ (ಬ್ರಾಹ್ಮೀ ಉಪನಿಷತ್ತಿನ) ಪ್ರತಿಷ್ಠೆಯು (Foundation) ಸತ್ಯವು (ಅದರ) ಆಯತನವು (ಆಲಯವು–ನಿವಾಸಸ್ಥಾನವು).

ಯೋ ವಾ ಏತಾಮೇವಂ ವೇದಾಪಹತ್ಯ ಪಾಪ್ಮಾನಮನಂತೇ ಸ್ವರ್ಗೇ ಲೋಕೇ ಜ್ಯೇಯೇ ಪ್ರತಿತಿಷ್ಠತಿ ಪ್ರತಿತಿಷ್ಠತಿ ॥ ೯ ॥

ಯಾರು ಈ ಪ್ರಕಾರದ ಉಪನಿಷತ್ತನ್ನು (ಬ್ರಹ್ಮವಿದ್ಯೆಯನ್ನು) ತಿಳಿಯುತ್ತಾರೋ, ನಿಶ್ಚಯವಾಗಿಯೂ ಅವನು ಪಾಪವನ್ನು ಕ್ಷೀಣಗೊಳಿಸಿ (ನಾಶಮಾಡಿ) ಸ್ವರ್ಗಲೋಕದಲ್ಲಿ ಸರ್ವ ಮಹತ್ತರವಾದ ನಾಶರಹಿತ (ಅನಂತ) ಬ್ರಹ್ಮನಲ್ಲಿ ದೃಢವಾಗಿ ನೆಲಸುವನು (ಪ್ರತಿತಿಷ್ಠತಿ). ಅಲ್ಲಿ ಸ್ಥಿರವಾಗಿ ನೆಲಸುವನು.

ಓಂ ಶಾಂತಿಃ ಶಾಂತಿಃ ಶಾಂತಿಃ

ಸಂಪೂರ್ಣ.

# ಕೇನೋಪನಿಷತ್

..........

## ಶಾಂತಿಪಾಠ ೧

ಓಂ ಸಹ ನಾವವತು । ಸಹ ನೌ ಭುನಕ್ತು ।. ಸಹವೀರ್ಯಂ ಕರವಾವಹೈ । ತೇಜಸ್ವಿನಾವಧೀತಮಸ್ತು । ಮಾ ವಿದ್ವಿಷಾವಹೈ ॥

ಓಂ ಶಾಂತಿಃ ಶಾಂತಿಃ ಶಾಂತಿಃ

ಓಂ ನಮ್ಮಿಬ್ಬರನ್ನು (ಗುರು ಮತ್ತು ಶಿಷ್ಯ) (ಪರಮಾತ್ಮನು) ರಕ್ಷಿಸಲಿ. ನಮ್ಮಿಬ್ಬರನ್ನು (ಪರಮಾತ್ಮನು) ಸುಖಪಡೆಯುವಂತೆ ಮಾಡಲಿ. ಶಾಸ್ತ್ರಗಳ ರಹಸ್ಯವನ್ನು ತಿಳಿಯುವುದಕ್ಕಾಗಿ ನಾವಿಬ್ಬರೂ ಪ್ರಯತ್ನಿಸುವಂತಾಗಲಿ. ನಮ್ಮ ಅಧ್ಯಯನವು ಸಂಪೂರ್ಣ ಮತ್ತು ಫಲಪ್ರದವಾಗಲಿ. ನಾವೆಂದಿಗೂ ಪರಸ್ಪರ ದ್ವೇಷಮಾಡದಂತಾಗಲಿ.

(ಅಧಿದೈವಿಕ ಪ್ರಕೋಪದಿಂದ ರಕ್ಷಿಸುವ) ಶಾಂತಿ ದೊರೆಯಲಿ.

(ಅಧಿಭೌತಿಕ ತಾಪದಿಂದ ರಕ್ಷಿಸುವ) ಶಾಂತಿ ನಮ್ಮಲ್ಲಿರಲಿ.

(ಶಾರೀರಿಕಾದಿಗಳ ತೊಡಕುಗಳನ್ನು ಪರಿಹರಿಸುವ) ಶಾಂತಿ ನಮ್ಮಲ್ಲಿರಲಿ.

## ಶಾಂತಿಪಾಠ ೨

ಓಂ ಆಪ್ಯಾಯಂತು ಮಮಾಂಗಾನಿ ವಾಕ್ಪ್ರಾಣಶ್ಚಕ್ಷುಃ ಶ್ರೋತ್ರಮಥೋಬಲಮಿಂದ್ರಿಯಾಣಿ ಚ ಸರ್ವಾಣಿ ಸರ್ವಂ ಬ್ರಹ್ಮೋಪನಿಷದಂ ಮಾಽಹಂ ಬ್ರಹ್ಮ ನಿರಾಕುರ್ಯಾಂ ಮಾ ಮಾ ಬ್ರಹ್ಮ ನಿರಾಕರೋದನಿರಾಕರಣಮಸ್ತ್ವನಿರಾಕರಣಂ ಮೇಽಸ್ತು ತದಾತ್ಮನಿ ನಿರತೇ ಯ ಉಪನಿಷತ್ಸು ಧರ್ಮಾಸ್ತೇ ಮಯಿಸಂತು ತೇ ಮಯಿ ಸಂತು ।

ಓಂ ಶಾಂತಿಃ ಶಾಂತಿಃ ಶಾಂತಿಃ

ನನ್ನ ಅಂಗಗಳು ಪುಷ್ಟಿಯಾಗಲಿ. ನನ್ನ ವಾಕ್, ಪ್ರಾಣ, ಕಣ್ಣು, ಕಿವಿ, ಬಲ, ಎಲ್ಲಾ ಇಂದ್ರಿಯಗಳು ದಾರ್ಢ್ಯವಾಗಿ ಪ್ರವರ್ಧಿಸಲಿ. ಇದೆಲ್ಲವೂ ಉಪನಿಷತ್ತಿನಲ್ಲಿ ಹೇಳಿರುವ ಬ್ರಹ್ಮನು. ನಾನೆಂದೂ ಬ್ರಹ್ಮವನ್ನು ನಿರಾಕರಿಸದಿರಲಿ.

ಬ್ರಹ್ಮನು ನನ್ನನ್ನು ನಿರಾಕರಿಸದಿರಲಿ. ಬ್ರಹ್ಮನ ನಿರಾಕರಣೆ ಇಲ್ಲದಂತಾಗಲಿ. ಬ್ರಹ್ಮನ ನಿರಾಕರಣೆ ಇಲ್ಲದಂತಾಗಲಿ. ಉಪನಿಷತ್ತಿನಲ್ಲಿ ಹೇಳಿರುವ ಎಲ್ಲಾ ಧರ್ಮಗಳು (ಸದ್ಗುಣಗಳು) ಆತ್ಮನಲ್ಲಿ ಆನಂದಿಸುತ್ತ ನನ್ನಲ್ಲಿ ವಿಶ್ರಾಂತಿಸಲಿ. ಅವು ನನ್ನಲ್ಲಿ ವಿಶ್ರಾಂತಿಸಲಿ.

ಓಂ ತ್ರಿವಿಧ ತಾಪಗಳಿಂದ ಶಾಂತಿಯು ನೆಲಸಲಿ.

## ಪ್ರಥಮ ಖಂಡ

ಓಂ ಕೇನೇಷಿತಂ ಪತತಿ ಪ್ರೇಷಿತಂ ಮನಃ ।
ಕೇನ ಪ್ರಾಣಃ ಪ್ರಥಮಃ ಪ್ರೈತಿ ಯುಕ್ತಃ ॥
ಕೇನೇಷಿತಾಂ ವಾಚಮಿಮಾಂ ವದಂತಿ ।
ಚಕ್ಷುಃ ಶ್ರೋತ್ರಂ ಕ ಉ ದೇವೋ ಯುನಕ್ತಿ ॥ ೧ ॥

ಕೇನ—ಯಾರಿಂದ, ಇಷಿತಂ—ಇಚ್ಛಿತವಾಗಿ, ಪ್ರೇಷಿತಂ—ಪ್ರೇರಿತವಾಗಿ, ಮನಃ—ಮನಸ್ಸು, ನಮ್ಮ ಮನಸ್ಸು, ಪತತಿ—ವಸ್ತುಗಳ ಮೇಲೆ ಹೋಗಿ ಎರಗುತ್ತದೆ? ಕೇನ—ಯಾರಿಂದ ಪ್ರಾಣಃ—ನಮ್ಮ ಪ್ರಾಣವು, ಪ್ರಥಮತಃ—ಮೊದಲನೆದಾಗಿ, ಯುಕ್ತ—ಪ್ರೇರಿತವಾಗಿ, ಪ್ರೈತಿ—ಚಲಿಸುತ್ತದೆ? ಕೇನ–ಯಾರಿಂದ, ಇಮಾಂ ವಾಚಮ್–ಈ ಮಾತನ್ನು (ಪ್ರೇರಿತವಾಗಿ) ವದಂತಿ–(ಜನರು) ಆಡುತ್ತಾರೆ? ಕಉ ದೇವಃ–ಯಾವ ದೇವನು, ಚಕ್ಷುಃ—ಕಣ್ಣುಗಳನ್ನು, ಶ್ರೋತ್ರಂ—ಕಿವಿಗಳನ್ನು, ಯುನಕ್ತಿ—ಪ್ರೇರೇಪಿಸುತ್ತಾನೆ?

ಶಿಷ್ಯ: ಯಾರಿಂದ ಇಚ್ಛಿತ ಮತ್ತು ಪ್ರೇರಿತವಾಗಿ ಮನಸ್ಸು ವಿಷಯಗಳ ಮೇಲೆ ಎರಗುತ್ತದೆ? ಯಾರಿಂದ ಪ್ರಯುಕ್ತವಾಗಿ ಮೊದಲನೆದಾಗಿ ಪ್ರಾಣವು ಚಲಿಸುತ್ತದೆ? ಮನುಷ್ಯರು ಯಾರಿಂದ ಪ್ರೇರಿತರಾಗಿ ಮಾತನ್ನು ಆಡುತ್ತಾರೆ? ಯಾವ ದೇವನು ಕಣ್ಣು ಮತ್ತು ಕಿವಿಗಳನ್ನು ಅವುಗಳ ವಿಷಯಗಳ ಕಡೆಗೆ ಪ್ರೇರೇಪಿಸುತ್ತಾನೆ?

ಶ್ರೋತ್ರಸ್ಯ ಶ್ರೋತ್ರಂ ಮನಸೋ ಮನೋ ಯದ್
ವಾಚೋ ಹ ವಾಚಂ ಸ ಉ ಪ್ರಾಣಸ್ಯ ಪ್ರಾಣಃ ॥
ಚಕ್ಷುಷಶ್ಚಕ್ಷುರತಿಮುಚ್ಯ ಧೀರಾಃ
ಪ್ರೇತ್ಯಾಸ್ಮಾಲ್ಲೋಕಾದಮೃತಾ ಭವಂತಿ ॥ ೨ ॥

**ಆಚಾರ್ಯ:** ಸ—ಅದು, ಶ್ರೋತ್ರಸ್ಯ ಶ್ರೋತ್ರಂ—ಕಿವಿಯ ಕಿವಿ, ನಮ್ಮಿ ಕಿವಿಗಳಿಂದ ಬೇರೆಯಾದ ಕಿವಿ, ಮನಸಃ ಮನಃ—ಮನಸ್ಸಿನ ಮನಸ್ಸು, ಯತ್—ಯಾವ, ವಾಚೋ ಹ ವಾಚಂ—ಮಾತಾಡುವ ನಾಲಗೆ, ಪ್ರಾಣಸ್ಯ ಪ್ರಾಣಂ—ಜೀವದ ಜೀವ, ಉ—ಮತ್ತು, ಚಕ್ಷುಷಃ ಚಕ್ಷುಃ—ಕಣ್ಣಿನ ಕಣ್ಣು, ಅತಿಮುಚ್ಯ—ಈ ಇಂದ್ರಿಯಗಳೊಡನೆ ತಾನೆಂಬ ಭಾವನೆಯನ್ನು ತ್ಯಜಿಸಿ, ಧೀರಾಃ—ಜ್ಞಾನಿಗಳು, ಧೀಮಂತರು, ಅಸ್ಮಾತ್ ಲೋಕಾತ್—ಈ ಲೋಕದಿಂದ, ಪ್ರೇತ್ಯ—ಈ ದೇಹವನ್ನು ತ್ಯಜಿಸಿ, ಎಂದರೆ ಮರಣವನ್ನುಹೊಂದಿ, ಅಮೃತಾಃ ಭವಂತಿ—ಅಮರರಾಗುತ್ತಾರೆ.

**ಆಚಾರ್ಯ:** ಅದು ಕಿವಿಯ ಕಿವಿ, ಮನಸ್ಸಿನ ಮನಸ್ಸು, ನಾಲಗೆಯ ನಾಲಗೆ, ಜೀವನದ ಜೀವನ ಮತ್ತು ಕಣ್ಣಿನ ಕಣ್ಣು ಆಗಿದೆ. ಇವುಗಳಲ್ಲಿ ಜ್ಞಾನಿಗಳು ಮಮಕಾರ ಅಥವಾ ಅಹಂ ಭಾವನೆಯನ್ನು ತ್ಯಜಿಸಿ, ಮರಣವನ್ನು ಹೊಂದಿ (ವಿಷಯ ಜೀವನಿಂದ ಮೇಲೇರಿ) ಅಮರರಾಗುತ್ತಾರೆ.

ನ ತತ್ರ ಚಕ್ಷುರ್ಗಚ್ಛತಿ ನ ವಾಗ್ಗಚ್ಛತಿ ನೋ ಮನೋ (ಮನಃ)
ನ ವಿದ್ಮೋ ನ ವಿಜಾನೀಮೋ ಯಥೈತದನುಶಿಷ್ಯಾತ್ ।
ಅನ್ಯದೇವ ತದ್ವಿದಿತಾದಥೋ ಅವಿದಿತಾದಧಿ ।
ಇತಿ ಶುಶ್ರುಮ ಪೂರ್ವೇಷಾಂ ಯೇ ನ ಸ್ತದ್ವ್ಯಾಚಚಕ್ಷಿರೇ॥೩॥

**ತತ್ರ—ಅಲ್ಲಿಗೆ, ಚಕ್ಷುಷಃ—ಕಣ್ಣು, ನ ಗಚ್ಛತಿ—ಹೋಗುವುದಿಲ್ಲ. ನ ವಾಕ್ ಗಚ್ಛತಿ—ವಾಣಿಯೂ ಹೋಗುವುದಿಲ್ಲ. ನೋಮನೋ (ಮನಃ)—ಮನಸ್ಸು (ಹೋಗುವುದು) ಇಲ್ಲ. ನ ವಿದ್ಮ—(ಬ್ರಹ್ಮನು ಈ ಪ್ರಕಾರ ಇರುವುದೆಂದು) (ಅದು). ನಮಗೆ ತಿಳಿದಿರುವುದಿಲ್ಲ. ಏತದ್—ಅದನ್ನು ಕುರಿತು, ಯಥಾ—ಹೇಗೆ, ಅನುಶಿಷ್ಯಾತ್—ಉಪದೇಶ ಕೊಡಬೇಕೆಂದು, ನ ವಿಜಾನೀಮಃ—ನಾವು ತಿಳಿದಿರುವುದಿಲ್ಲ.**

ತತ್—ಅದು, ಅನ್ಯದೇವ—ಅನ್ಯತ್+ಏವ—(ನಿಶ್ಚಯವಾಗಿಯೂ ನಾವು ತಿಳಿದಿರುವುದಕ್ಕಿಂತ) ಬೇರೆಯಾಗಿದೆ. ಅಥೋ—ಮತ್ತು, ಅವಿದಿತಾತ್—ತಿಳಿಯದಿರುವುದಕ್ಕಿಂತ, ಅಧಿ—ಮೇಲೆ ಇದೆ. ಎಂದರೆ ಬೇರೆಯಾಗಿದೆ. ಯೇ—ಯಾವ, ಪೂರ್ವೇಷಾಂ—ಪ್ರಾಚೀನ ಋಷಿಗಳಿಂದ, ನಃ—ನಮಗೆ, ತತ್—ಆ ಬ್ರಹ್ಮನ ಕುರಿತು, ವ್ಯಾಚ ಚಕ್ಷಿರೆ—ಸ್ಪಷ್ಟವಾಗಿ ಹೇಳಿರುವುದನ್ನು (ನಾವು) ಇತಿ—ಹೀಗೆ, ಶುಶ್ರುಮ—ಕೇಳಿದ್ದೇವೆ.

ಅಲ್ಲಿಗೆ ಕಣ್ಣು ಹೋಗುವುದಿಲ್ಲ, ವಾಣಿಯು ಹೋಗುವುದಿಲ್ಲ, ಮನಸ್ಸು ಹೋಗುವುದಿಲ್ಲ. ಅದು ನಮಗೆ ತಿಳಿದಿರುವುದಿಲ್ಲ. ಅದರ ಕುರಿತು ಹೇಗೆ ಉಪದೇಶವನ್ನು ಕೊಡಬೇಕೆಂದು ನಾವು ತಿಳಿದಿರುವುದಿಲ್ಲ.

ಅದು ತಿಳಿದಿರುವುದಕ್ಕಿಂತ ಬೇರೆಯಾಗಿದೆ. ಮತ್ತು ತಿಳಿಯದಿರುವುದಕ್ಕಿಂತ ಮೇಲೆ ಇದೆ. ನಮಗೆ ಸ್ಪಷ್ಟವಾಗಿ ಪ್ರಾಚೀನ ಋಷಿಗಳು ಕಲಿಸಿರುವುದನ್ನು ನಾವು ಹೀಗೆ ಕೇಳಿದ್ದೇವೆ.

ಯದ್ವಾಚಾಽನಭ್ಯುದಿತಂ ಯೇನ ವಾಗಭ್ಯುದ್ಯತೆ ।
ತದೇವ ಬ್ರಹ್ಮತ್ವಂ ವಿದ್ಧಿ ನೇದಂ ಯದಿದಮುಪಾಸತೇ ॥೪॥

ಯತ್—ಯಾವುದು, ವಾಚಾ—ವಾಣಿಯಿಂದ, ಅಭ್ಯುದಿತಂ—ಪ್ರಕಾಶಿಸಲ್ಪಡುವುದಿಲ್ಲವೋ, (ಆದರೆ), ಯೇನ—ಯಾವುದರಿಂದ, ವಾಕ್—ವಾಣಿಯು, ಅಭ್ಯುದ್ಯತೆ—ಪ್ರಕಾಶಿತವಾಗುವುದೋ, ತದೇವ—(ತತ್ ಏವ) ಅದೇ, ಬ್ರಹ್ಮ—ಬ್ರಹ್ಮವೆಂದು, ತ್ವಂ ವಿದ್ಧಿ—ನೀನು ತಿಳಿ. ಯತ್-ಇದಂ—ಯಾವುದನ್ನು, ಉಪಾಸತೇ—ಉಪಾಸನೆಮಾಡುವರೋ, ನ ಇದಂ ಬ್ರಹ್ಮ—ಇದು ಬ್ರಹ್ಮವಲ್ಲವು.

ಯಾವುದನ್ನು ವಾಣಿಯು ಪ್ರಕಾಶಿಸಲಾರದೋ ಆದರೆ ಯಾವುದರಿಂದ ವಾಣಿಯು ಪ್ರಕಟಿಸಲಾಗುತ್ತದೆಯೋ ಅದೇ ಬ್ರಹ್ಮವೆಂದು ತಿಳಿ. ಜನರು ಪೂಜಿಸುತ್ತಿರುವ ಇದು ಬ್ರಹ್ಮವಲ್ಲವು.

ಯನ್ಮನಸಾ ನ ಮನುತೇ ಯೇನಾಹುರ್ಮನೋ ಮತಮ್ ।
ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮುಪಾಸತೇ ॥ ೫ ॥

ಯತ್—ಯಾವುದು, ಮನಸಾ—ಮನಸ್ಸಿನಿಂದ, ನ ಮನುತೇ—ವಿಚಾರಿಸಲ್ಪಡುವುದಿಲ್ಲವೋ, (ಆದರೆ) ಯೇನ—ಯಾವುದರಿಂದ, ಮನೋ

—ಮನಸ್ಸು, ಮತವ್‌—ತಿಳಿಯಲ್ಪಡುತ್ತದೆಂದು, ಆಹುಃ—ಹೇಳುತ್ತಾರೋ, ತದೇವ—ಅದೇ ಬ್ರಹ್ಮವೆಂದು, ತ್ವಂ ವಿದ್ಧಿ—ನೀನು ತಿಳಿ. ನ ಇದಂ........ ಮೇಲಿನಂತೆಯೇ.

ಯಾವುದನ್ನು ಮನಸ್ಸು ವಿಚಾರಿಸಲಾರದೋ, ಆದರೆ ಯಾವುದರಿಂದ ಮನಸ್ಸು ತಿಳಿಯಲ್ಪಡುತ್ತದೆಂದು ಹೇಳುತ್ತಾರೋ, ಅದೇ ಬ್ರಹ್ಮವೆಂದು ತಿಳಿ. ಜನರು ಪೂಜಿಸುತ್ತಿರುವುದು ಬ್ರಹ್ಮವಲ್ಲವು.

ಯಚ್ಚಕ್ಷುಷಾ ನ ಪಶ್ಯತಿ ಯೇನ ಚಕ್ಷೂಂಷಿ ಪಶ್ಯತಿ ।
ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮುಪಾಸತೇ॥ ೬ ॥

ಯತ್‌—ಯಾವುದು, ಚಕ್ಷುಷಾ—ಕಣ್ಣಿನಿಂದ, ನ ಪಶ್ಯತಿ—ಕಾಣಲ್ಪಡುವುದಿಲ್ಲವೋ, (ಆದರೆ) ಯೇನ-ಯಾವುದರಿಂದ, ಚಕ್ಷೂಂಷಿ-ಕಣ್ಣಿನ ವೃತ್ತಿಗಳು, ಪಶ್ಯತಿ—ನೋಡಲ್ಪಡುತ್ತವೆಯೋ, ತದೇವ ಬ್ರಹ್ಮ—ಅದೇ ಬ್ರಹ್ಮವೆಂದು, ತ್ವಂ ವಿದ್ಧಿ—ನೀನು ತಿಳಿ. ನ ಇದಂ........ಮೇಲಿನಂತೆಯೆ.

ಯಾವುದು ಕಣ್ಣಿನಿಂದ ನೋಡಲ್ಪಡುವುದಿಲ್ಲವೋ, ಆದರೆ ಯಾವುದರಿಂದ ಕಣ್ಣಿನ ವೃತ್ತಿಗಳು ನೋಡಲ್ಪಡುತ್ತವೆಯೋ, ಅದೇ ಬ್ರಹ್ಮವೆಂದು ತಿಳಿ. ಜನರು ಪೂಜಿಸುತ್ತಿರುವ ಇದು ಬ್ರಹ್ಮವಲ್ಲವು.

ಯಚ್ಛ್ರೋತ್ರೇಣ ನ ಶೃಣೋತಿ ಯೇನ ಶ್ರೋತ್ರಮಿದಂ ಶ್ರುತಮ್ ।
ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮುಪಾಸತೇ ॥ ೭ ॥

ಯತ್‌—ಯಾವುದು, ಶ್ರೋತ್ರೇಣ—ಕಿವಿಯಿಂದ, ನ ಶೃಣೋತಿ—ಕೇಳಲ್ಪಡುವುದಿಲ್ಲವೋ, (ಆದರೆ) ಯೇನ—ಯಾವುದರಿಂದ, ಶ್ರೋತ್ರಮಿದಂ ಶ್ರುತಮ್‌—ಈ ಕಿವಿಯು ಕೇಳುತ್ತದೆಯೋ, ತದೇವ ಬ್ರಹ್ಮ—ಅದೇ ಬ್ರಹ್ಮವೆಂದು, ತ್ವಂ ವಿದ್ಧಿ—ನೀನು ತಿಳಿ. ನ ಇದಂ........ಮೇಲಿನಂತೆಯೇ.

ಯಾವುದು ಕಿವಿಯಿಂದ ಕೇಳಲ್ಪಡುವುದಿಲ್ಲವೋ, ಆದರೆ ಯಾವುದರಿಂದ ಕಿವಿಯು ಕೇಳುತ್ತದೆಯೋ, ಅದೇ ಬ್ರಹ್ಮವೆಂದು ತಿಳಿ. ಜನರು ಪೂಜಿಸುತ್ತಿರುವ ಇದು ಬ್ರಹ್ಮವಲ್ಲವು.

ಯತ್ಪ್ರಾಣೇನ ನ ಪ್ರಾಣಿತಿ ಯೇನ ಪ್ರಾಣಃ ಪ್ರಣೀಯತೇ ।
ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮುಪಾಸತೇ ॥ ೮ ॥

ಯತ್—ಯಾವುದು, ಪ್ರಾಣೇನ—ಮೂಗಿನ ದ್ವಾರದಿಂದ, ಮೂಗಿನ ಘ್ರಾಣಶಕ್ತಿಯಿಂದ, ನ ಪ್ರಾಣಿತಿ—ತಿಳಿಯುವುದಿಲ್ಲವೋ, (ಆದರೆ) ಯೇನ-ಯಾವುದರಿಂದ, ಪ್ರಾಣಃ—ಮೂಗು, ಪ್ರಣೀಯತೇ—ಮೂಸಿ ತಿಳಿಯುತ್ತದೆಯೋ, ತದೇವ ಬ್ರಹ್ಮ—ಅದೇ ಬ್ರಹ್ಮವೆಂದು, ತ್ವಂ ವಿದ್ಧಿ—ನೀನು ತಿಳಿ ನ ಇದಂ........ಮೇಲಿನಂತೆಯೆ.

ಯಾವುದು ಮೂಗಿನಿಂದ ತಿಳಿಯುವುದಿಲ್ಲವೋ, ಆದರೆ, ಯಾವುದರಿಂದ ಮೂಗು ತಿಳಿಯುತ್ತದೆಯೋ ಅದೇ ಬ್ರಹ್ಮವೆಂದು ತಿಳಿ. ಜನರು ಪೂಜಿಸುತ್ತಿರುವ ಇದು ಬ್ರಹ್ಮವಲ್ಲವು.

## ದ್ವಿತೀಯ ಖಂಡ

ಯದಿ ಮನ್ಯಸೇ ಸುವೇದೇತಿ ದಭ್ರಮೇವಾಪಿ (ದಹರಮೇವಾಪಿ)
ನೂನಂ ತ್ವಂ ವೇತ್ಥ ಬ್ರಹ್ಮಣೋ ರೂಪಮ್ ।
ಯದಸ್ಯ ತ್ವಂಯದಸ್ಯ ದೇವೇಷ್ವಥ ನು
ಮೀಮಾಂಸ್ಯಮೇವ ತೇ ಮನ್ಯೇ ವಿದಿತಮ್ ॥ ೧ ॥

**ಆಚಾರ್ಯ:** ಯದಿಮನ್ಯಸೇ- ನೀನು ತಿಳಿಯುವುದಾದರೆ, ಸುವೇದ ಇತಿ- "ನಾನು (ಬ್ರಹ್ಮವನ್ನು) ಚನ್ನಾಗಿ ತಿಳಿದಿರುವೆನು" ಯತ್ ಅಸ್ಯ-ಯಾವ, ಬ್ರಹ್ಮಣೋರೂಪಮ್-ಬ್ರಹ್ಮನ ರೂಪವು, ಯದಸ್ಯ-ಯಾವ ದೇವೇಷು-ದೇವತೆಗಳಲ್ಲಿ (ತಿಳಿದಿರುವೆನು) (ಅದು) ನೂನಂ-ನಿಶ್ಚಯವಾಗಿಯೂ, ದಭ್ರಮೇವಾಪಿ-ಸ್ವಲ್ಪಮಾತ್ರವೇ, ತ್ವಂ- ವೇತ್ಥ- ನೀನು ತಿಳಿದಿರುವಿ. ಅಥನು-ಆದ್ದರಿಂದ, ತೇ-ನೀನು ತಿಳಿದಿರುವುದೂ, ಮೀಮಾಂಸ್ಯಂ ಏವ-ವಿಚಾರಣೀಯವಾಗಿದೆ.

**ಶಿಷ್ಯ:** ಮನ್ಯೇ ವಿದಿತಮ್-ನಾನು ತಿಳಿದಿರುವೆನೆಂದು ಭಾವಿಸುತ್ತೇನೆ.

**ಆಚಾರ್ಯ:** ನೀನು ಯಾವ ಬ್ರಹ್ಮರೂಪದಲ್ಲಿ, ಯಾವ ದೇವತಾರೂಪದಲ್ಲಿ "ನಾನು ಬ್ರಹ್ಮವನ್ನು ಚನ್ನಾಗಿ ತಿಳಿದಿರುವೆನು" ಎಂದು ಭಾವಿಸುವುದಾದರೆ, ನಿಶ್ಚಯವಾಗಿಯೂ ಅದು ಅತ್ಯಲ್ಪ ಮಾತ್ರವೇ ನೀನು ತಿಳಿದಿರುವುದಾಗಿದೆ. ಆದ್ದರಿಂದ ನೀನು ತಿಳಿದಿರುವುದು ಇನ್ನೂ ವಿಚಾರಣೀಯವಾಗಿದೆ.

ಶಿಷ್ಯ: ಈಗ ನಾನು ತಿಳಿದಿರುವೆನೆಂದು ಭಾವಿಸುತ್ತೇನೆ.

ನಾಹಂ ಮನ್ಯೇ ಸುವೇದೇತಿ ನೋ ನ ವೇದೇತಿ ವೇದ ಚ ।
ಯೋ ನಸ್ತದ್ವೇದ ತದ್ವೇದ ನೋ ನ ವೇದೇತಿ ವೇದ ಚ ॥ ೨ ॥

ಸುವೇದ ಇತಿ- "ನಾನು (ಬ್ರಹ್ಮವನ್ನು) ಚನ್ನಾಗಿ ತಿಳಿದಿರುವೆನು", ನ ಅಹಂ ಮನ್ಯೆ-ನಾನು ತಿಳಿದಿರುವುದಿಲ್ಲ. ನೋ ನ ವೇದ ಇತಿ-ನಾನು ತಿಳಿದಿರುವುದಿಲ್ಲ ಎಂದಲ್ಲ. ವೇದ ಚ- ಮತ್ತು ನಾನು ತಿಳಿದಿರುವೆನು. ನಃ-ನಮ್ಮಲ್ಲಿ (ಶಿಷ್ಯರಲ್ಲಿ), ನೋ ನವೇದ ಇತಿ-ನಾನು ತಿಳಿದಿರುವುದಿಲ್ಲ. ವೇದ ಚ-"ನಾನು ತಿಳಿದಿರುವೆನು"ಎಂದು, ಯೋ-ಯಾರು, ವೇದ-ತಿಳಿದಿರುವರೋ, (ಅವನ) ತತ್ ವೇದ-ಬ್ರಹ್ಮನನ್ನು ತಿಳಿದವನಾಗಿದ್ದಾನೆ.

ನಾನು ಬ್ರಹ್ಮವನ್ನು ಚನ್ನಾಗಿ ತಿಳಿದಿರುವುದಿಲ್ಲ. ಆದರೆ ನಾನು ತಿಳಿದಿರುವುದಿಲ್ಲ ಎಂದಲ್ಲ. ನಮ್ಮಲ್ಲಿ "ನಾನು ತಿಳಿದಿರುವುದಿಲ್ಲ. ನಾನು ತಿಳಿದಿರುವೆನು" ಎಂದು ಯಾರು ತಿಳಿದಿರುವನೋ ಅವನು ಬ್ರಹ್ಮನನ್ನು ತಿಳಿದವನಾಗಿದ್ದಾನೆ.

ಯಸ್ಯಾಮತಂ ಯಸ್ಯ ಮತಂ ಮತಂ ಯಸ್ಯ ನ ವೇದ ಸಃ ।
ಅವಿಜ್ಞಾತಂ ವಿಜಾನತಾಂ ವಿಜ್ಞಾತಮವಿಜಾನತಾಮ್ ॥ ೩ ॥

ಯಸ್ಯ-ಯಾರಿಗೆ, ಅಮತಂ- ತಿಳಿದಿಲ್ಲವೋ, ತಸ್ಯ - ಅವನಿಗೆ, ಮತಂ-ತಿಳಿದಿರುತ್ತದೆ. ಯಸ್ಯ-ಯಾರಿಗೆ, ಮತಂ-ತಿಳಿದಿರುವುದೋ, ಸಃ ನ ವೇದ-ಅವನು ತಿಳಿದಿರುವುದಿಲ್ಲ. ವಿಜಾನತಾಂ-ಜ್ಞಾನಿಗೆ, ಅವಿಜ್ಞಾತಂ-ತಿಳಿದಿರುವುದಿಲ್ಲ. ಅವಿಜ್ಞಾತಂ-ಅಜ್ಞಾನಿಗೆ ವಿಜಾನತಾಂ-ತಿಳಿದಿರುತ್ತದೆ.

ಯಾರು ತನಗೆ ಬ್ರಹ್ಮನು ತಿಳಿದಿರುವುದಿಲ್ಲ ಎಂದು ಭಾವಿಸುತ್ತಾನೋ ಅವನಿಗೆ ನಿಜವಾಗಿಯೂ ತಿಳಿದಿರುತ್ತದೆ. ಆದರೆ ಯಾರು ತಾನು ತಿಳಿದಿರುತ್ತೇನೆಂದು ಭಾವಿಸುತ್ತಾನೆಯೋ, ಅವನು ತಿಳಿದಿರುವುದಿಲ್ಲ. ಜ್ಞಾನಿಗೆ ತಿಳಿದಿರುವುದಿಲ್ಲ; ಆದರೆ ಅಜ್ಞಾನಿಗೆ ತಿಳಿದಿರುತ್ತದೆ.

ಪ್ರತಿಬೋಧ ವಿದಿತಂ ಮತಮಮೃತತ್ವಂ ಹಿ ವಿಂದತೇ ।
ಆತ್ಮನಾ ವಿಂದತೇ ವೀರ್ಯಂ ವಿದ್ಯಯಾ ವಿಂದತೇಽಮೃತಮ್ ॥ ೪ ॥

ಪ್ರತಿಬೋಧ ವಿದಿತಂ-ಬೋಧಂ ಬೋಧಂ ಪ್ರತಿ ವಿದಿತಂ-ಬುದ್ಧಿಯ ಎಲ್ಲಾ ಪ್ರತಿವೃತ್ತಿಯಲ್ಲಿಯೂ ಬ್ರಹ್ಮನು ಎಂದು ತಿಳಿಯಲ್ಪಡುವುದೋ,(ಅ)

ಮತಂ-ಬ್ರಹ್ಮನು ನಿಶ್ಚಯವಾಗಿಯೂ ತಿಳಿಯಲ್ಪಡುತ್ತದೆ. ಹಿ-ಏಕೆಂದರೆ, (ಆ ಬ್ರಹ್ಮಜ್ಞಾನದಿಂದ) ಅಮೃತತ್ವಂ-ಅಮೃತತ್ವವನ್ನು, ವಿಂದತೇ-ಹೊಂದುತ್ತಾನೆ. ಆತ್ಮನಾ-ಸ್ವಸ್ವರೂಪವಾದ ಆತ್ಮಜ್ಞಾನದಿಂದ, ವೀರ್ಯಂ-ಬಲವನ್ನು, ಸಾಮರ್ಥ್ಯವನ್ನು, ವಿಂದತೇ-ಪಡೆಯುತ್ತಾನೆ. ಮತ್ತು, ವಿದ್ಯಯಾ-ಆತ್ಮಜ್ಞಾನದಿಂದ, ಅಮೃತಂ-ಅಮೃತತ್ವವನ್ನು, ವಿಂದತೇ-ಹೊಂದುವನು.

ಯಾರು ಬುದ್ಧಿಯ ಎಲ್ಲಾ ವೃತ್ತಿಯಲ್ಲಿಯೂ ಬ್ರಹ್ಮನನ್ನು ತಿಳಿಯುವನೋ ಅಥವಾ ಕಾಣುವನೋ ಆಗ ಬ್ರಹ್ಮನು ನಿಶ್ಚಯವಾಗಿಯೂ ಅವನಿಗೆ ತಿಳಿಯಲ್ಪಡುವನು. ಏಕೆಂದರೆ ಆತ್ಮಜ್ಞಾನದಿಂದ ಅವನು ಅಮೃತತ್ವವನ್ನು ಹೊಂದುತ್ತಾನೆ. ಸ್ವಸ್ವರೂಪ ಆತ್ಮಜ್ಞಾನದಿಂದ ನಿಜವಾದ ಸಾಮರ್ಥ್ಯವನ್ನು ಪಡೆಯುತ್ತಾನೆ, ಮತ್ತು ಆತ್ಮಜ್ಞಾನದಿಂದ ಅಮೃತತ್ವವನ್ನು ಹೊಂದುವನು.

ಇಹ ಚೇದವೇದೀದಥ ಸತ್ಯಮಸ್ತಿ
ನ ಚೇದಿಹಾವೇದೀನ್ಮಹತೀ ವಿನಷ್ಟಿಃ ।
ಭೂತೇಷು ಭೂತೇಷು ವಿಚಿತ್ಯ ಧೀರಾಃ
ಪ್ರೇತ್ಯಾಸ್ಮಾಲ್ಲೋಕಾದಮೃತಾ ಭವಂತಿ ॥ ೫ ॥

ಇಹ-ಇಲ್ಲಿ, ಈ ಜನ್ಮದಲ್ಲಿ, ಚೇತ್ ಅವೇದಿತ-ಬ್ರಹ್ಮನನ್ನು ತಿಳಿದರೆ, ಅಥ-ಆಗ, ಸತ್ಯಮಸ್ತಿ-ಸತ್ಯವು ಇದೆ(ದೊರೆಯುವುದು). ಇಹ-ಇಲ್ಲಿ, ಚೇತ್ ನ ಅವೇದಿತ್-ತಿಳಿಯದಿದ್ದರೆ, ಮಹತೀ-ಮಹತ್ತಾದ, ವಿನಷ್ಟಿ- ನಾಶವು ಪ್ರಾಪ್ತವಾಗುವುದು. (ಆದ್ದರಿಂದ) ಧೀರಾ-ಜ್ಞಾನಿಗಳು, ಭೂತೇಷು ಭೂತೇಷು-ಸಮಸ್ತ ಚರಾಚರ ಪ್ರಾಣಿವಸ್ತುಗಳಲ್ಲಿ, ವಿಚಿತ್ಯ-ಬ್ರಹ್ಮವನ್ನು ತಿಳಿದವರಾಗಿ, ಅಸ್ಮಾತ್ ಲೋಕಾತ್ ಪ್ರೇತ್ಯಾ-ಈ ಲೋಕದಿಂದ, ವಿಷಯ ಜೀವನದಿಂದ ತಿರುಗಿದವರಾಗಿ, ಅಮೃತಾ ಭವಂತಿ-ಅಮರರಾಗುತ್ತಾರೆ.

ಇಲ್ಲಿ ಬ್ರಹ್ಮವನ್ನು ತಿಳಿದರೆ ಜೀವನದ ಎಲ್ಲಾ ಕೋರಿಕೆಯ ಸತ್ಯಸ್ಥಿತಿಯು ಲಭಿಸುವುದು. ಈ ಲೋಕದಲ್ಲಿ ತಿಳಿಯದಿದ್ದರೆ ಮಹತ್ತಾದ ನಾಶವು ಪ್ರಾಪ್ತವಾಗುವುದು. ಆದ್ದರಿಂದ ಜ್ಞಾನಿಗಳು ಎಲ್ಲಾ ಚರಾಚರ ಪ್ರಾಣಿ ವಸ್ತುವಿನಲ್ಲಿ ಬ್ರಹ್ಮನನ್ನು ತಿಳಿದು, ಈ ವಿಷಯ ಜೀವನದಿಂದ ವಿಮುಖರಾಗಿ ಅಮರರಾಗುತ್ತಾರೆ.

# ತೃತೀಯ ಖಂಡ

## ಯಕ್ಷೋಪಾಖ್ಯಾನ

ಬ್ರಹ್ಮ ಹ ದೇವೇಭ್ಯೋ ವಿಜಿಗ್ಯೇ ತಸ್ಯ ಹ ಬ್ರಹ್ಮಣೋ ವಿಜಯೇ ದೇವಾ ಅಮಹೀಯಂತ ॥ ೧ ॥

**ಆಚಾರ್ಯ: ಬ್ರಹ್ಮನು ನಿಜವಾಗಿಯೂ ದೇವತೆಗಳಿಗಾಗಿ ವಿಜಯವನ್ನು ಪಡೆದನು (ವಿಜಿಗ್ಯೆ) ಎಂದು ಹೇಳಲ್ಪಟ್ಟಿದೆ. ಆ ಬ್ರಹ್ಮನು ಪಡೆದ ವಿಜಯದಲ್ಲಿ ದೇವತೆಗಳು ಮಹಿಮೆಯನ್ನು (ಗೌರವವನ್ನು) ಪಡೆದರು.**

ತ ಐಕ್ಷಂತಾಸ್ಮಾಕಮೇವಾಯಂ ವಿಜಯೋऽಸ್ಮಾಕಮೇವಾಯಂ ಮಹಿಮೇತಿ। ತದ್ಧೈಷಾಂ ವಿಜಜ್ಞೌ ತೇಭ್ಯೋ ಹ ಪ್ರಾದುರ್ಬಭೂವ ತನ್ನ ವ್ಯಜಾನತ ಕಿಮಿದಂ ಯಕ್ಷಮಿತಿ ॥ ೨ ॥

**(ಆ ದೇವತೆಗಳು) ಅವರು ಹೀಗೆ ಭಾವಿಸಿದರು. "ಈ ವಿಜಯವು ನಮ್ಮದೇ ಆಗಿದೆ. (ಇದು) ನಮ್ಮ ಮಹಿಮೆಯೆ ಆಗಿದೆ." ಬ್ರಹ್ಮನು ಈ ವಿಚಾರವನ್ನು ತಿಳಿದನು. ಆ ದೇವತೆಗಳ ಮುಂದೆ ಗೋಚರವಾದನು. ಈ ಯಕ್ಷವೇನೆಂದು ದೇವತೆಗಳು ತಿಳಿಯಲಾರದವರಾದರು.**

ತೇऽಗ್ನಿಮಬ್ರುವನ್ ಜಾತವೇದ ಏತದ್ವಿಜಾನೀಹಿ ಕಿಮಿದಂ ಯಕ್ಷಮಿತಿ (ತಿಮೇತದ್ಯಕ್ಷಮಿತಿ) ತಥೇತಿ ॥ ೩ ॥

**ಅವರು (ದೇವತೆಗಳು) ಅಗ್ನಿಯ ಕುರಿತು ಹೀಗೆಂದರು: (ಜಾತವೇದನೇ! (ನಮ್ಮ ಮುಂದೆ ಕಾಣಿಸಿಕೊಂಡಿರುವ) ಈ ಯಕ್ಷನೇನೆಂದು ವಿಚಾರಿಸುವವನಾಗು:" (ಅವನು) "ಆಗಲಿ" (ಎಂದನು).**

ತದಭ್ಯದ್ರವತ್ತಮಭ್ಯವದತ್ಕೋऽಸೀತ್ಯಗ್ನಿರ್ವಾ ಅಹಮಸ್ಮೀತ್ಯಬ್ರವೀಜ್ಜಾತವೇದ ವಾ ಅಹಮಸ್ಮೀತಿ ॥ ೪ ॥

**ಅಗ್ನಿಯು ಅದರ ಕಡೆಗೆ ತ್ವರಿತದಿಂದ ಹೋದನು. (ಅದು ಅವನಿಗೆ) ಹೀಗೆಂದಿತು: "ನೀನಾರು? (ಕೋऽಸೀತಿ) "ನಾನು ಅಗ್ನಿಯೇ ಆಗಿರುವೆನು. ನಾನು ಜಾತವೇದನೇ ಆಗಿರುವೆನು" ಎಂದು (ಅಗ್ನಿಯು) ಹೇಳಿದನು.**

ತಸ್ಮಿಂಸ್ತ್ವಯಿ ಕಿಂ ವೀರ್ಯಮಿತ್ಯಪೀದಂ ಸರ್ವಂ ದಹೇಯಂ ಯದಿದಂ ಪೃಥಿವ್ಯಾಮಿತಿ ॥ ೫ ॥

(ಯಕ್ಷರೂಪದ ಬ್ರಹ್ಮನು ಹೀಗೆಂದನು) "ಅಂತಹ ನಿನ್ನಲ್ಲಿ ಎಂತಹ ವೀರ್ಯವಿದೆ? (ಸಾಮರ್ಥ್ಯವಿದೆ?) (ಅಗ್ನಿಯು ಅಂದನು). "ಪೃಥ್ವಿಯಲ್ಲಿರುವ ಇದೆಲ್ಲವನ್ನೂ ಸುಡಬಲ್ಲೆನು."

ತಸ್ಮೈ ತೃಣಂ ನಿದಧಾವೇತದ್ದಹೇತಿ । ತದುಪಪ್ರೇಯಾಯ ಸರ್ವಜವೇನ ತನ್ನ ಶಶಾಕ ದಗ್ಧುಂ ಸ ತತ ಏವ ನಿವವೃತೇ ನೈತದಶಕಂ ವಿಜ್ಞಾತುಂ ಯದೇತದ್ಯಕ್ಷಮಿತಿ ॥ ೬ ॥

"ಒಂದು ತೃಣ-ಹುಲ್ಲನ್ನು (ತೋರಿಸಿ) ಇದನ್ನು ಸುಡು (ನೋಡುವ)" ಎಂದು (ಅಗ್ನಿಯ) ಮುಂದಿಟ್ಟನು. ಅಗ್ನಿಯು (ಪರಿಪೂರ್ಣವಾದ ಉತ್ಸಾಹದಿಂದುಂಟಾದ) ಸಾಮರ್ಥ್ಯ ಅಥವಾ ಗತಿಯಿಂದ ಅದರ (ಹುಲ್ಲಿನ) ಸಮೀಪಕ್ಕೆ ಹೋದನು. ಅದನ್ನು ಸುಡಲಾರದೆ ಹೋದನು. ಆ ಯಕ್ಷದಿಂದ ಅಗ್ನಿಯು "ಈ ಯಕ್ಷವೇನೆಂದು ಸಂಪೂರ್ಣ ತಿಳಿಯಲಾಗಲಿಲ್ಲ" (ಎಂದು ದೇವತೆಗಳಿಗೆ ಹೇಳಲು) ಮಣ್ಣನೆ ಹಿಂತಿರುಗಿದನು.

ಅಥ ವಾಯುಮಬ್ರುವನ್ವಾಯವೇತದ್ವಿಜಾನೀಹಿ ಕಿಮೇತದ್ಯಕ್ಷಮಿತಿ ತಥೇತಿ ॥ ೭ ॥

ಆನಂತರ (ದೇವತೆಗಳು) ವಾಯುವಿಗೆ ಹೀಗೆಂದರು: "ವಾಯುವೇ! ಈ ಯಕ್ಷವೇನೆಂದು ಇದನ್ನು ವಿಚಾರಿಸುವವನಾಗು" (ಅವನು) "ಆಗಲಿ" (ಎಂದನು).

ತದಭ್ಯದ್ರವತ್ತಮಭ್ಯವದತ್ಕೋಽಸೀತಿ । ವಾಯುರ್ವಾ ಅಹಮಸ್ಮೀತ್ಯಬ್ರವೀನ್ಮಾತರಿಶ್ವಾವಾ ಅಹಮಸ್ಮೀತಿ ॥ ೮ ॥

ವಾಯುವು ಅವರ ಕಡೆಗೆ ತ್ವರಿತದಿಂದ ಹೋದನು. (ಅದು ಅವನಿಗೆ) ಹೀಗೆಂದಿತು: "ನೀನಾರು?" "ನಾನು ವಾಯುವೇ ಆಗಿರುವೆನು. ನಾನು ಮಾತರಿಶ್ವನೇ ಆಗಿರುವೆನು" ಎಂದು (ವಾಯುವು) ಹೇಳಿದನು.

ತಸ್ಮಿಂಸ್ತ್ವಯಿ ಕಿಂ ವೀರ್ಯಮಿತ್ಯಪೀದಂ ಸರ್ವಮಾದದೀಯ ಯದಿದಂ ಪೃಥಿವ್ಯಾಮಿತಿ ॥ ೯ ॥

**(ಯಕ್ಷನು ಹೀಗೆಂದನು) ಅಂತಹ ನಿನ್ನಲ್ಲಿ ಎಂತಹ ವೀರ್ಯವಿದೆ? (ಸಾಮರ್ಥ್ಯವಿದೆ?) (ವಾಯುವು ಅವನು) "ಪೃಥ್ವಿಯಲ್ಲಿರುವ ಇವೆಲ್ಲವನ್ನೂ ಹಾರಿಸಬಲ್ಲೆನು."**

ತಸ್ಮೈ ತೃಣಂ ನಿದಧಾವೇತದ್ದಹೇತಿ । ತದುಪಪ್ರೇಯಾಯ ಸರ್ವಜವೇನ ತನ್ನಶಶಾಕಾದಾತುಂ ಸ ತತ ಏವ ನಿವವೃತೇ ನೈತದಶಕಂ ವಿಜ್ಞಾತುಂ ಯದೇತದ್ಯಕ್ಷಮಿತಿ ॥ ೧೦ ॥

**ಒಂದು ಹುಲ್ಲನ್ನು (ತೋರಿಸಿ) "ಇದನ್ನು ಹಾರಿಸು (ನೋಡುವ) ಎಂದು (ವಾಯುವಿನ) ಮುಂದಿಟ್ಟನು. ವಾಯುವು (ಬಹಳ ಉತ್ಸಾಹದಿಂದುಂಟಾದ) ಸಾಮರ್ಥ್ಯ ಅಥವಾ ಗತಿಯಿಂದ ಅದರ (ಹುಲ್ಲಿನ) ಸಮೀಪಕ್ಕೆ ಹೋದನು. ಅದನ್ನು ಹಾರಿಸಲಾರದೆ ಹೋದನು. "ಈ ಯಕ್ಷವೇನೆಂದು ಸಂಪೂರ್ಣ ತಿಳಿಯಲಾಗಲಿಲ್ಲ" ಎಂದು (ದೇವತೆಗಳಿಗೆ ಹೇಳಲು) ವಾಯುವು ಆ ಯಕ್ಷದಿಂದ ಮಿಣ್ಣನೆ ಹಿಂತಿರುಗಿದನು.**

ಅಥೇಂದ್ರಮಬ್ರುವನ್ಮಘವನ್ನೇತದ್ವಿಜಾನೀಹಿ ಕಿಮೇತದ್ಯಕ್ಷಮಿತಿ ತಥೇತಿ ತದಭ್ಯದ್ರವತ್ತಸ್ಮಾತ್ತಿರೋದಧೇ ॥ ೧೧ ॥

**ಅನಂತರ (ದೇವತೆಗಳು) ಇಂದ್ರನೊಡನೆ ಹೀಗೆಂದರು, "ಮಘವನ್! ಈ ಯಕ್ಷವೇನೆಂದು ಇದನ್ನು ವಿಚಾರಿಸುವವನಾಗು" (ಅವನು) "ಆಗಲಿ" ಎಂದನು. ಅವನು ಅದರ ಸಮೀಪಕ್ಕೆ ತ್ವರಿತದಿಂದ ಹೋದನು. ಆ ಇಂದ್ರನಿಂದ ಯಕ್ಷನು ಅದೃಶ್ಯನಾದನು.**

ಸ ತಸ್ಮಿನ್ನೇವಾಕಾಶೇ ಸ್ತ್ರಿಯಮಾಜಗಾಮ ಬಹುಶೋಭಮಾನಾಮುಮಾಂ ಹೈಮವತೀಂ ತಾಂ ಹೋವಾಚ ಕಿಮೇತದ್ಯಕ್ಷಮಿತಿ ॥ ॥ ೧೨ ॥

**ಆ ಇಂದ್ರನು ಆ ಆಕಾಶಸ್ಥಾನದಲ್ಲಿ ಅತ್ಯಂತ ಶೋಭಾಯಮಾನಳಾದ ಉಮಾ ಹೇಮಾವತಿ ಸ್ತ್ರೀಯನ್ನು ಸಂದರ್ಶಿಸಿದನು. "ಈ ಯಕ್ಷವೇನು?" ಎಂದು ಅವಳೊಡನೆ (ಕೇಳಿದನು).**

## ಚತುರ್ಥ ಖಂಡ

## ಉಮಾ ಉಪದೇಶ

ಸಾ ಬ್ರಹ್ಮೇತಿ ಹೋವಾಚ ಬ್ರಹ್ಮಣೋ ವಾ ಏತದ್ವಿಜಯೇ ಮಹೀಯಧ್ವಮಿತಿ ತತೋ ಹೈವ ವಿದಾಂಚಕಾರ ಬ್ರಹ್ಮೇತಿ ॥ ೧ ॥

"ನಿಶ್ಚಯವಾಗಿಯೂ ಅದು ಬ್ರಹ್ಮವು. ಈ ಬ್ರಹ್ಮನ ವಿಜಯದಲ್ಲಿ ನೀವು ಈ ಪ್ರಕಾರ ಗೌರವಿತರಾದಿರಿ" ಅವಳು ಹೇಳಿದಳು. ಆ ಉತ್ತರ ದಿಂದಲೇ ಮಾತ್ರ (ಇಂದ್ರನು) ಅದು ಬ್ರಹ್ಮನೆಂದು ತಿಳಿದನು.

ತಸ್ಮಾದ್ವಾ ಏತೇ ದೇವಾ ಅತಿತರಾಮಿವಾನ್ಯಾನ್‌ದೇವಾನ್ಯ-ದಗ್ನಿರ್ವಾಯುರಿಂದ್ರಸ್ತೇ ಹ್ಯೇನನ್ನೇದಿಷ್ಠಂ ಪಸ್ಪೃಶುಸ್ತೇ ಹ್ಯೇನ-ತ್ಪ್ರಥಮೋ ವಿದಾಂಚಕಾರ ಬ್ರಹ್ಮೇತಿ ॥ ೨ ॥

ಅದ್ದರಿಂದ, ನಿಶ್ಚಯವಾಗಿಯೂ ಈ ದೇವತೆಗಳು, ಎಂದರೆ ಅಗ್ನಿ, ವಾಯು ಮತ್ತು ಇಂದ್ರ ಈ ಬ್ರಹ್ಮನನ್ನು ಅತ್ಯಂತ ಸಾಮಿಪ್ಯದಿಂದ ಸ್ಪರ್ಶಿ ಸಿದ್ದರಿಂದ ಅನ್ಯ ದೇವತೆಗಳಿಂದ ಉತ್ಕೃಷ್ಟರಾದರು (ಅತಿತರಾಮ್) ಮತ್ತು ಅದು ಬ್ರಹ್ಮನೆಂದು ಪ್ರಥಮ ತಿಳಿದರು.

ತಸ್ಮಾದ್ವಾ ಇಂದ್ರೋಽತಿತರಾಮಿವಾನ್ಯಾನ್ದೇವಾನ್ಸ ಹ್ಯೇನನ್ನೇ-ದಿಷ್ಠಂ ಪಸ್ಪರ್ಶ ಸ ಹ್ಯೇನತ್ಪ್ರಥಮೋ ವಿದಾಂಚಕಾರ ಬ್ರಹ್ಮೇತಿ ॥ ೩ ॥

ಆದ್ದರಿಂದ ಇಂದ್ರನು ಅನ್ಯ ದೇವತೆಗಳಿಂದ ಪ್ರಕೃಷ್ಟನಾದನು. ಏಕೆಂದರೆ ಅವನು ಬ್ರಹ್ಮನನ್ನು ಅತ್ಯಂತ ಸಾಮಿಪ್ಯದಿಂದ ಸ್ಪರ್ಶಿಸಿದನು ಮತ್ತು ಅದು ಬ್ರಹ್ಮನೆಂದು ಪ್ರಥಮ ತಿಳಿದನು.

ತಸ್ಯೈಷ ಆದೇಶೋ ಯದೇತದ್ವಿದ್ಯುತೋ ವ್ಯದ್ಯುತದಾ ೩ ಇತೀನ್ ನ್ಯಮೀಮಿಷದಾ೩ ಇತ್ಯಧಿದೈವತಮ್ ॥ ೪ ॥

ವಿದ್ಯುತ್ತು ಚಮಕಿಸುವಂತೆ ಮತ್ತು ಕಣ್ಣು ಮಿನುಗುವಂತೆ, ಆ ಬ್ರಹ್ಮನ ಅಧಿದೈವ ರೂಪದ ಸಾಮ್ಯದಿಂದ ಆದೇಶವು. ಅಥವಾ